## ॥ ನೀನ್ಯಾಕೋ ನಿನ್ನ ಹಂಗ್ಯಾಕೋ ॥

ನೀನ್ಯಾಕೋ ನಿನ್ನ ಹಂಗ್ಯಾಕೋ ।
ನಿನ್ನ ನಾಮದ ಬಲವೊಂದಿದ್ದರೆ ಸಾಕೋ ॥ ಪ ॥

ಕರಿ ಮಕರಿಗೆ ಸಿಕ್ಕಿ ಮೊರೆಯಿಡುತ್ತಿರುವಾಗ ।
ಆದಿಮೂಲನೆಂಬ ನಾಮವೇಕಾಯ್ತೋ ॥ ೧ ॥

ಪ್ರಹ್ಲಾದನ ಪಿತ ಬಾಧಿಸುತ್ತಿರುವಾಗ ।
ನರಹರಿಯೆಂಬ ನಾಮವೇಕಾಯ್ತೋ ॥ ೨ ॥

ಬಾಲೆಯ ಸಭೆಯಲ್ಲಿ ಸೀರೆಯ ಸೆಳೆವಾಗ ।
ಕೃಷ್ಣ ಕೃಷ್ಣ ಎಂಬ ನಾಮವೇಕಾಯ್ತೋ ॥ ೩ ॥

ಯಮನ ದೂತರು ಬಂದು ಅಜಮಿಳನನೆಳೆವಾಗ ।
ನಾರಾಯಣನೆಂಬ ನಾಮವೇಕಾಯ್ತೋ ॥ ೪ ॥

ಆ ಮರ ಈ ಮರ ಎಂದು ಧ್ಯಾನಿಸುತ್ತಿರುವಾಗ ।
ರಾಮ ರಾಮವೆಂಬ ನಾಮವೇ ಕಾಯ್ತೋ ॥ ೫ ॥

ಹಸುಳೆ ಆ ಧ್ರುವರಾಯ ಅಡವಿಗೆ ಪೋಪಾಗ ।
ವಾಸುದೇವನೆಂಬ ನಾಮವೇಕಾಯ್ತೋ ॥ ೬ ॥

ನಿನ್ನ ನಾಮಕೆ ಸರಿಕಾಣೆನು ಜಗದೊಳು ।
ಘನಮಹಿಮ ಸಿರಿ ಪುರಂದರ ವಿಠಲ ॥ ೭ ॥